# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 954
ಸದಸ್ಯರ ಹೆಸರು : ಶ್ರೀ ಕಾಂತರಾಜ್
ಉತ್ತರಿಸುವ ದಿನಾಂಕ : 13.03.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರತಿ ವರ್ಷ ಡಿಸೆಂಬರ್-3ರಂದು ಅಂಗವಿಕಲರ ದಿನಾಚರಣೆಯನ್ನು ಸರ್ಕಾರ ಆಚರಿಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ವತಿಯಿಂದ ಪ್ರತಿ ವರ್ಷ ಡಿಸೆಂಬರ್ 03 ರಂದು ವಿಶ್ವ ವಿಕಲಚೇತನರ ದಿನಾಚರಣೆಯನ್ನು ಸರ್ಕಾರದ ವತಿಯಿಂದ ಆಚರಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಅಂಗವಿಕಲರಿಗಾಗಿ ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ; ಬಂದಿದ್ದಲ್ಲಿ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ವಿಕಲಚೇತನರು ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದಿಲ್ಲ. |
| ಇ) | ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ರೂ.11,500ಕ್ಕೆ ನಿಗಧಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಮತ್ತು ಇದು ಇಂದಿನ ಕಾಲಕ್ಕೆ ಪ್ರಸ್ತುತವೋ ಎಂದು ಪರಿಶೀಲಿಸುವ ಗೋಜಿಗೆ ಹೋಗದ ಸರ್ಕಾರ ಅಂಗವಿಕಲರ ನೆರವಿಗೆ ರೂಪಿಸಿರುವ ಕಾರ್ಯಕ್ರಮಗಳು ಯಾವುವು; | ಅಂಗವಿಕಲ ವ್ಯಕ್ತಿಗಳಿಗೆ ಆರೋಗ್ಯ, ಶಿಕ್ಷಣ, ವಸತಿ ಇಲಾಖೆಗಳಿಂದ ಅನೇಕ ಸೌಲಭ್ಯಗಳನ್ನು ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಸಾಧನ ಸಲಕರಣೆಗಳನ್ನು ಒದಗಿಸಲಾಗುತ್ತಿದ್ದು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ವಾರ್ಷಿಕ ಆದಾಯ ಗ್ರಾಮೀಣ ಪ್ರದೇಶದಲ್ಲಿ ರೂ.12,000/- ಹಾಗೂ ಪಟ್ಟಣ ಪ್ರದೇಶದಲ್ಲಿ ರೂ.17,000/-ಗಳನ್ನು ಹೊಂದಿರುವ ಮತ್ತು ಶೇಕಡ 40ಕ್ಕಿಂತ ಹೆಚ್ಚಿನ ಅಂಗವಿಕಲತೆ ಇರುವ ವ್ಯಕ್ತಿಗಳಿಗೆ ಅವರ ಜೀವನ ನಿರ್ವಹಣೆಗಾಗಿ ಮಾಸಿಕ ಪಿಂಚಣಿಯನ್ನು ನೀಡಲಾಗುತ್ತಿದೆ. |
| ಈ) | ಪೋಷಕರ ವರಮಾನ ಮಿತಿ ಏರಿಕೆಯಾಗದೆ ಯಾವ ಸವಲತ್ತು ಫಲ ಪಡೆಯಲು ಅಂಗವಿಕಲರಿಗೆ ಸಾಧ್ಯವಾಗುವುದಿಲ್ಲವಾದ್ದರಿಂದ ಸರ್ಕಾರ ಈ ಬಗ್ಗೆ ತಕ್ಷಣವೇ ಕ್ರಮ ತೆಗೆದುಕೊಳ್ಳುವುದೇ; | ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಬಿ.ಪಿ.ಎಲ್ ಕಾರ್ಡ್ ಆಧಾರದ ಮೇಲೆ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಕೆಲವೊಂದು ಯೋಜನೆಗಳಲ್ಲಿ ಆದಾಯ ಮಿತಿ ಇರುವುದಿಲ್ಲ ವಿವರಗಳು ಈ ಕೆಳಕಂಡಂತಿದೆ. |

| ಕ್ರ.ಸಂ | ಯೋಜನೆ ಹೆಸರು | ವಿವರ |
|---|---|---|
| 1 | ನಿರುದ್ಯೋಗಿ ವಿಕಲಚೇತನರಿಗೆ ನಿರುದ್ಯೋಗ ಭತ್ಯೆ | ಆದಾಯ ಮಿತಿ ಇರುವುದಿಲ್ಲ. |
| 2 | ಎಸ್.ಎಸ್.ಎಲ್.ಸಿ ಹಾಗೂ ನಂತರದ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ವಿತರಣೆ, | ಆದಾಯ ಮಿತಿ ಇರುವುದಿಲ್ಲ. |

| ಕ್ರ.ಸಂ | ಯೋಜನೆ ಹೆಸರು | ವಿವರ |
|---|---|---|
| 3 | ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ | ಆದಾಯ ಮಿತಿ ಇರುವುದಿಲ್ಲ. |
| 4 | ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ | ಆದಾಯ ಮಿತಿ ಇರುವುದಿಲ್ಲ. |
| 5 | ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಬಹುಮಾನ | ಆದಾಯ ಮಿತಿ ಇರುವುದಿಲ್ಲ. |
| 6 | ಅಂಗವಿಕಲತೆ ನಿವಾರಣಾ ವೈದ್ಯಕೀಯ ಪರಿಹಾರ ನಿಧಿ | ಆದಾಯ ಮಿತಿ ಇರುವುದಿಲ್ಲ. |
| 7 | ಸಾಧನೆ ಮತ್ತು ಪ್ರತಿಭೆ | ಆದಾಯ ಮಿತಿ ಇರುವುದಿಲ್ಲ. |
| 8 | ಅಂಗವಿಕಲರಿಗೆ ಮಾಸಿಕ ನಿರ್ವಹಣೆ ಭತ್ಯೆ | ಗ್ರಾಮೀಣ ಪ್ರದೇಶದಲ್ಲಿ ರೂ.12,000/- ನಗರ ಪ್ರದೇಶದಲ್ಲಿ ರೂ.17,000/- |
| 9 | ಸಾಧನ ಸಲಕರಣೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |
| 10 | ತೀವ್ರತರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನ ನೀಡುವುದು | ಕುಟುಂಬದ ವಾರ್ಷಿಕ ಆದಾಯ ರೂ.2.00 ಲಕ್ಷಗಳಿಗಿಂತ ಕಡಿಮೆಯಿರಬೇಕು |
| 11 | ಸ್ವಯಂ ಉದ್ಯೋಗಕ್ಕಾಗಿ ಆಧಾರ ಯೋಜನೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |
| 12 | ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯ ವ್ಯಕ್ತಿಗಳು ವಿವಾಹವಾದಲ್ಲಿ ಪ್ರೋತ್ಸಾಹ ಧನ | ವಿಕಲಚೇತನ ವ್ಯಕ್ತಿಗಳೊಡನೆ ವಿವಾಹವಾಗುವ ಸಾಮಾನ್ಯ ವ್ಯಕ್ತಿಗಳಿಗೆ ಯಾವುದೇ ಆದಾಯ ಮಿತಿ ಇರುವುದಿಲ್ಲ. |
| 13 | ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳ ಪಾಲನೆಗೆ ಶಿಶು ಪಾಲನಾ ಭತ್ಯೆ | ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಗಳ ಒಳಗಿರಬೇಕು |
| 14 | ಬುದ್ಧಿಮಾಂದ್ಯ ವ್ಯಕ್ತಿಗಳ ತಂದೆ-ತಾಯಿ/ಪೋಷಕರಿಗೆ ವಿಮಾ ಯೋಜನೆ | ಗ್ರಾಮೀಣ ಪ್ರದೇಶದಲ್ಲಿ ರೂ.11,500/- ನಗರ ಪ್ರದೇಶದಲ್ಲಿ ರೂ.24,000/- |

| | | |
|---|---|---|
| ಉ) | ಅಂಗವಿಕಲರಿಗೆ ಅಂಗವಿಕಲತೆಯಲ್ಲಿ ಶೇಕಡಾವಾರು ನಿಗಧಿ ಮಾಡಿ, ನೀಡುತ್ತಿರುವ ಮಾಸಿಕ ಪಿಂಚಣಿಯಲ್ಲಿ ತಾರತಮ್ಯ ತೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ? (ವಿವರ ನೀಡುವುದು) | ಶೇ.40%ಕ್ಕಿಂತ ಹೆಚ್ಚು ಅಂಗವಿಕಲತೆ ಹೊಂದಿರುವ ವಿಕಲಚೇತನರಿಗೆ ರೂ.600/-ಗಳು ಹಾಗೂ ಶೇ.75ಕ್ಕಿಂತ ಹೆಚ್ಚು ಅಂಗವಿಕಲತೆ ಹೊಂದಿರುವವರಿಗೆ ರೂ.1400/-ಗಳ ಮಾಸಿಕ ಪಿಂಚಣಿ ನೀಡಲಾಗುತ್ತಿದೆ. |

| | | |
|---|---|---|
| ಊ) | ಅಂಗವಿಕಲರು ಅಂಗವಿಕಲರಾಗಿಯೇ ಇರುವುದರಿಂದ ಇವರ ಬಗ್ಗೆ ಸರ್ಕಾರ ಮಾನವೀಯತೆ ಮೆರೆದು, ಅನುಕಂಪ/ದಯೆ/ಸಹಾನುಭೂತಿ ವ್ಯಕ್ತಪಡಿಸಿ ಅಂಗವಿಕಲತೆಯಲ್ಲಿ ಶೇಕಡಾವಾರು ತೆಗೆದುಹಾಕಿ ಎಲ್ಲಾ ಅಂಗವಿಕಲರಿಗೆ ಒಂದೇ ರೀತಿ ಮಾಸಿಕ ಪಿಂಚಣಿ ನೀಡಲು ಸರ್ಕಾರ ಕ್ರಮ ತೆಗೆದುಕೊಳ್ಳುವುದೇ?(ವಿವರ ನೀಡುವುದು) | ಪ್ರಸ್ತಾವನೆ ಇರುವುದಿಲ್ಲ. |

**ಸಂಖ್ಯೆ: ಮಮಇ 65 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ
ಇಲಾಖಾ ಸಚಿವರು